# ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆಯ ಉದ್ದೇಶಗಳು

## – ಮೋನಿಕಾ ಭಂಡಾರಿ

**The Aims of the School Assembly**

**– Monika Bhandari**

ಈ ಲೇಖನದಲ್ಲಿ ನಾನು ಶಾಲಾ ಬದುಕಿನ ಎರಡು ಮುಖ್ಯ ಅಂಶಗಳ ಕುರಿತು ಚರ್ಚಿಸಲಿದ್ದೇನೆ. ಅದರಲ್ಲಿ ಮೊದಲನೆಯದು ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆಯ ಉದ್ದೇಶ ಮತ್ತು ಉಪಯೋಗ ಹಾಗೂ ಎರಡನೆಯದು, ಒಂದೇ ವಿಷಯವನ್ನು ವಿಭಿನ್ನ ಹಂತಗಳಲ್ಲಿ ಕಲಿಸುವುದನ್ನು ಕುರಿತು.

## ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆ

ಶಾಲೆಯಲ್ಲಿ ಮಕ್ಕಳೊಂದಿಗೆ ಕೆಲಸ ಮಾಡುವಾಗ ನಾವು ಪ್ರತಿದಿನವೂ ಹೊಸ ಅನುಭವಗಳನ್ನು ಗಳಿಸಿಕೊಳ್ಳುತ್ತೇವೆ. ಒಂದು ಶಾಲೆಗೆ ನಾವು ವಿಷಯ ತಜ್ಞರಾಗಿ ಹೋದಾಗ ನಮಗೆ ಮಕ್ಕಳೊಂದಿಗೆ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದು ಕಷ್ಟವಾಗುತ್ತದೆ ಎಂಬುದು ನನ್ನ ಭಾವನೆ. ಏಕೆಂದರೆ ನಾವು ಮಕ್ಕಳಿಂದ ಭಿನ್ನವಾದ ಹೊಸದನ್ನೇ ಕಲಿಯುತ್ತಿರುತ್ತೇವೆ ಮತ್ತು ನಮ್ಮ ವಿಷಯ ತಜ್ಞತೆಯು ಗೌಣವಾಗುತ್ತದೆ. ವಿಷಯದಲ್ಲಿನ ತಜ್ಞ ತಿಳಿವಳಿಕೆ ಅಮುಖ್ಯ ಎಂಬುದು ನನ್ನ ಅಭಿಪ್ರಾಯವಲ್ಲ; ಬದಲಿಗೆ ನಾನು ಹೇಳುತ್ತಿರುವುದು ಇಷ್ಟೇ. ಒಂದು ಕಾಲಘಟ್ಟದಲ್ಲಿ ಮಕ್ಕಳು ಯಾವ ಮಟ್ಟದಲ್ಲಿದ್ದಾರೋ ಆ ಮಟ್ಟಕ್ಕೇ ನಾವು ತಲಪಬೇಕು. ಅವರೆಲ್ಲರೂ ಒಂದೇ ಮಟ್ಟದಲ್ಲೇ ಇರಬೇಕು ಎಂಬುದೇನೂ ಅವಶ್ಯವಲ್ಲ. ಸಾಮಾನ್ಯವಾಗಿ ನಮ್ಮ ಶಾಲೆಗಳ ಮಕ್ಕಳು ವಿಭಿನ್ನ ಮಟ್ಟಗಳಲ್ಲಿರುತ್ತಾರೆ ಮತ್ತು ಇದರಿಂದಾಗಿ ಕೆಲವೊಮ್ಮೆ ಬೋಧನೆ ಮಾಡಲು ಸಮಸ್ಯೆಯಾಗುತ್ತದೆ.

ನಾನು ೬ ರಿಂದ ೮ನೇ ತರಗತಿಯವರೆಗಿನ ಮಕ್ಕಳಿಗೆ ವಿಜ್ಞಾನ ಮತ್ತು ಗಣಿತವನ್ನು ಕಲಿಸುತ್ತೇನೆ. ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರ ಮುಂತಾದ ಮೂಲಭೂತ ಕ್ರಿಯೆಗಳನ್ನು ೬ನೇ ತರಗತಿಯ ಮಕ್ಕಳು ಸಮರ್ಥವಾಗಿ ಕಲಿಯದಿದ್ದಾಗ ಎರಡೂ ವಿಷಯಗಳ ಬೋಧನೆ ಮತ್ತು ಕಲಿಕೆ ಒಂದು ಸವಾಲಾಗಿಬಿಡುತ್ತದೆ. ಅಂತಹ ಸಂದರ್ಭದಲ್ಲಿ ಪಠ್ಯಕ್ರಮವನ್ನೇ ಅನುಸರಿಸಬೇಕು ಎಂದರೆ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸುತ್ತದೆ. ದಪ್ಪ ದಪ್ಪ ಗಾತ್ರದ ಗಣಿತದ ಪುಸ್ತಕಗಳು ನಮ್ಮ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳನ್ನು ಹುಟ್ಟಿಸುತ್ತವೆ, ಉದಾ: ಇಷ್ಟೊಂದು ವಿಷಯವನ್ನು ಹೇಗೆ, ಯಾವಾಗ ಕಲಿಸುವುದು? ಮಕ್ಕಳ ಮಟ್ಟ ಮತ್ತು ಆಸಕ್ತಿಗೆ ತಕ್ಕಂತೆ ಏನನ್ನಾದರೂ ಮಾಡಲು ಸಾಧ್ಯವೇ? ಆಗ ನಾನು ಯೋಚಿಸುತ್ತಾ ನನ್ನನ್ನೇ ಕೇಳಿಕೊಳ್ಳುತ್ತೇನೆ. –

ನನ್ನ ಪ್ರೀತಿಯ ಮಕ್ಕಳಿಗೆ ನಿಜಕ್ಕೂ ಅಗತ್ಯವಾದದ್ದು ಏನು? ಪಠ್ಯಕ್ರಮವನ್ನು ಮುಗಿಸುವುದು ಮುಖ್ಯವೋ ಅಥವಾ ಮೂಲಭೂತ ಪರಿಕಲ್ಪನೆಗಳನ್ನು ಹಾಗೂ ಕ್ರಿಯೆಗಳನ್ನು ಅರ್ಥಮಾಡಿಸುವುದೋ? ಅನಂತರ ನಾನು ಈ ಮಕ್ಕಳು ನನ್ನಲ್ಲಿ ವಿಶ್ವಾಸವನ್ನು ಉಳಿಸಿಕೊಳ್ಳುವಂತೆ ಮತ್ತು ಅದೇ ಸಮಯದಲ್ಲಿ ಪಾಠದ ತಿರುಳನ್ನು ಅರ್ಥಮಾಡಿಕೊಳ್ಳುವಂತೆ ಏನನ್ನಾದರೂ ಮಾಡಬೇಕು ಎಂದು ನಿರ್ಧರಿಸುತ್ತೇನೆ.

ಮಕ್ಕಳು ತುಂಬ ಕ್ರಿಯಾಶೀಲರೂ ಹಾಗೂ ಕಲ್ಪನಾಶೀಲರೂ ಆಗಿರುತ್ತಾರೆ. ಅನೇಕ ಬಾರಿ ನಮಗೆ ಅವರ ಸ್ವಭಾವ ಅರ್ಥವಾಗುವುದಿಲ್ಲ. ಅನೇಕ ಬಾರಿ ನಾನು ಅವರ ಅನುಭವಗಳಿಂದ ಕಲಿತಿರುತ್ತೇನೆ. ಒಂದು ಪುಸ್ತಕವನ್ನು ಸುಮ್ಮನೆ ಮೊದಲ ಪುಟದಿಂದ ಕಡೆಯವರೆಗೂ ಕಲಿಸುವುದೇ ಶಿಕ್ಷಣದ ಉದ್ದೇಶವಲ್ಲ ಎಂಬುದು ನನ್ನ ಭಾವನೆ. ಮಕ್ಕಳಲ್ಲಿ ತಿಳಿವಳಿಕೆಯನ್ನು ಬೆಳೆಸುವಂತೆ ಅವರಿಗೆ ಒಂದು ಮುಕ್ತವಾದ ಮತ್ತು ಸುಭದ್ರವಾದ ಪರಿಸರವನ್ನು ಸೃಷ್ಟಿಸುವುದೇ ಮುಖ್ಯವಾದದ್ದು. ಮಕ್ಕಳೊಂದಿಗೆ ಏನೆಲ್ಲ ಮಾಡಿದ್ದೇನೆ ಅಥವಾ ಮಾಡುತ್ತಿದ್ದೇನೆ ಅದನ್ನು ಹಂಚಿಕೊಳ್ಳುತ್ತಿದ್ದೇವೆ.

## ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆಯ ಉಪಯೋಗ ಮತ್ತು ಉದ್ದೇಶ

ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆಯನ್ನು ಎಲ್ಲ ಶಾಲೆಗಳ ಅತ್ಯಗತ್ಯ ಭಾಗ ಎಂದು ಪರಿಗಣಿಸಲಾಗುತ್ತದೆ. ನನಗೆ ಇದರೊಂದಿಗೆ ಸಹಮತವಿದೆ, ಏಕೆಂದರೆ ಆಗ ಎಲ್ಲ ಮಕ್ಕಳೂ ಲವಲವಿಕೆಯಿಂದಿರುತ್ತಾರೆ. ಈ ಸಭೆಯಲ್ಲಿ ಅವರು ಒಬ್ಬರೊಂದಿಗೆ ಇನ್ನೊಬ್ಬರು ಕಲಿಯುತ್ತಾರೆ. ಅದೇನೇ ಇರಲಿ ಪ್ರತಿಮಗುವೂ ಒಂದು ವಿಭಿನ್ನ ಮಟ್ಟದಲ್ಲಿರುತ್ತದೆ. ಆದ್ದರಿಂದ ಅವರನ್ನು ತರಗತಿಗಳ ಪ್ರಕಾರ ವರ್ಗೀಕರಿಸಬಾರದು ಎಂದು ನಾನು ಭಾವಿಸುತ್ತೇನೆ. ನಾವು ಅವರವರ ಮಟ್ಟಕ್ಕೆ ತಕ್ಕಂತೆ ಅವರನ್ನು ಗುಂಪುಗಳಾಗಿ ವಿಭಜಿಸಬೇಕು. ಮಕ್ಕಳು ತಮ್ಮ ಸಂಕೋಚವನ್ನು ಮೀರಿಬರುವಂತೆ ಮಾಡಬೇಕು. ತಮ್ಮ ಗುಂಪಿನಲ್ಲಿ ಏನನ್ನಾದರೂ ಕಲಿತು ಅವರು ಅದನ್ನು ಪ್ರದರ್ಶಿಸುವಂತಾಗಬೇಕು ಎಂಬುದೇ ಮುಂಜಾವಿನ ಸಭೆಯ ಮುಖ್ಯ ಉದ್ದೇಶ. ಆದ್ದರಿಂದ ನಾನು ಮಕ್ಕಳನ್ನು ಮೂರು ಗುಂಪುಗಳಾಗಿ ವಿಭಜಿಸಿದೆ. ಸಾಮಾನ್ಯವಾಗಿ ಆತ್ಮವಿಶ್ವಾಸವಿಲ್ಲದಿರುವುದರಿಂದ ಮಕ್ಕಳು ಬೇರೆಯವರ ಎದುರು ಮಾತನಾಡಲು ನಾಚಿಕೊಳ್ಳುತ್ತಾರೆ. ಮಕ್ಕಳಿಗೆ ಮಾತನಾಡಲು ಪೂರ್ತಿ ಸ್ವಾತಂತ್ರ್ಯ ನೀಡಿದ್ದರೂ ನನ್ನ ಶಾಲೆಯಲ್ಲೂ ಇದೇ ಪರಿಸ್ಥಿತಿ ಇದೆ. ಪ್ರತಿಯೊಂದು ಮಗುವೂ ಸಹ ಪ್ರಾತಃಕಾಲದ ಸಭೆಯಲ್ಲೇ ಆಗಲಿ ಅಥವಾ ಬೇರೆ ಎಲ್ಲೇ ಆಗಲೀ ಮುಂದೆ ಬಂದು ಮಾತನಾಡುವಂತಾಗಲು ಅವರ ಆತ್ಮವಿಶ್ವಾಸವನ್ನು ಮೇಲಕ್ಕೆತ್ತಲು ನಾನು ಯೋಜನೆಗಳನ್ನು ರೂಪಿಸಬೇಕಾಯಿತು. ಅವರ ಈ ರೀತಿಯ ಭಯವನ್ನು ಹೋಗಲಾಡಿಸಲು ನಾನು ಶಾಲೆಯಲ್ಲಿರುವ ಮಕ್ಕಳ ಸಂಖ್ಯೆಯ ಆಧಾರದಲ್ಲಿ ಮಕ್ಕಳ ಮೂರು ಗುಂಪುಗಳನ್ನು ರಚಿಸಿದೆ. ಪ್ರತಿಯೊಂದು ಗುಂಪಿನಲ್ಲೂ ಅವರ ಸಂಖ್ಯೆ

ಸಮಸಮವಾಗಿಯೇ ಇತ್ತಾದರೂ ೬ ರಿಂದ ೮ ರವರೆಗಿನ ತರಗತಿಗಳ ಕಿಶೋರಾವಸ್ಥೆಯ ಹುಡುಗರು ಮತ್ತು ಹುಡುಗಿಯರು, ತಾವು ಹುಡುಗರು ಅಥವಾ ಹುಡುಗಿಯರ ಪ್ರತ್ಯೇಕ ಗುಂಪುಗಳಲ್ಲಿರಲು ಇಚ್ಛಿಸಿದರು. ಅವರ ಭಾವನಾತ್ಮಕ ಬೆಳವಣಿಗೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನಾನು ಅವರನ್ನು ಸಮಾನ ಸಂಖ್ಯೆಯಲ್ಲಿ ಒಂದೇ ಗುಂಪಿನಲ್ಲಿ ಇರಿಸಿದೆ. ಹಳದಿ ಮನೆ, ಕೆಂಪುಮನೆ, ಹಸಿರುಮನೆ ಹೀಗೆ ಪ್ರತಿಯೊಂದು ಗುಂಪಿಗೂ ವಿಭಿನ್ನ ಹೆಸರನ್ನು ನೀಡಲಾಗಿತ್ತಲ್ಲದೆ ಅವರಿಗೆ ಹಳದಿ, ಕೆಂಪು ಮತ್ತು ಹಸಿರು ಬಣ್ಣದ ಬ್ಯಾಡ್ಜ್‌ಗಳನ್ನು ನೀಡಲಾಗಿತ್ತು. ಈ ಗುಂಪುಗಳಿಗೆ ಪ್ರಾರ್ಥನೆಯನ್ನು ನಿರ್ವಹಿಸುವುದು, ತರಗತಿಗಳನ್ನು ಸ್ವಚ್ಛಗೊಳಿಸುವುದು, ಗಿಡಗಳಿಗೆ ನೀರು ಹಾಕುವುದು ಮತ್ತು ಇನ್ನೂ ಅನೇಕ ಸಣ್ಣ ಪುಟ್ಟ ಜವಾಬ್ದಾರಿಗಳನ್ನು ವಹಿಸಲಾಗಿತ್ತು. ಈಗ ವಿವಿಧ ಕರ್ತವ್ಯಗಳನ್ನು ನಿಭಾಯಿಸುವುದು ಮಕ್ಕಳ ಜವಾಬ್ದಾರಿಯಾಯಿತು.

ಪ್ರತಿವಾರದ ಮೊದಲ ಎರಡು ದಿನಗಳಲ್ಲಿ ಮೊದಲನೆಯ ಗುಂಪು ಕರ್ತವ್ಯವನ್ನು ನಿಭಾಯಿಸಬೇಕಾಗುತ್ತಿತ್ತು, ಮುಂದಿನ ಎರಡು ದಿನಗಳು ಎರಡನೆಯ ಗುಂಪು ಮತ್ತು ಕೊನೆಯ ಎರಡು ದಿನಗಳು ಮೂರನೆಯ ಗುಂಪು ಕರ್ತವ್ಯಗಳನ್ನು ನಿರ್ವಹಿಸುತ್ತಿತ್ತು. ಈ ರೀತಿಯಲ್ಲಿ ಶಾಲೆಯ ಕೆಲಸಗಳು ಚೆನ್ನಾಗಿ ನಿರ್ವಹಿಸಲ್ಪಟ್ಟವು; ಏಕೆಂದರೆ ಪ್ರತಿಯೊಂದು ಗುಂಪೂ ಸಹ ತಾನು ಅತ್ಯುತ್ತಮವಾಗಿ ಕೆಲಸ ಮಾಡಬೇಕೆಂದು ಶ್ರಮಿಸುತ್ತಿತ್ತು. ಹೀಗೆ ಮುಂಜಾನೆಯ ಸಾಮಾನ್ಯ ಸಭೆಯ ಉದ್ದೇಶಗಳನ್ನು ಸಾಧಿಸಲಾಯಿತು. ಪ್ರತಿಯೊಂದು ಗುಂಪಿನ ಮಕ್ಕಳು ಸಹ ತಮ್ಮ ಗುಂಪಿನ ಸರದಿಯ ಪ್ರಕಾರ ಪ್ರಾರ್ಥನೆಯನ್ನು, ವೃಂದ ಗೀತೆಗಳನ್ನು ಹಾಡುತ್ತಿದ್ದರು. ಪ್ರತಿಯೊಂದು ತರಗತಿಯ ಮಕ್ಕಳ ಕ್ರಮಸಂಖ್ಯೆಯ ಪ್ರಕಾರ ಅವರುಗಳಿಂದ ರಸಪ್ರಶ್ನೆ, ಸಾಮಾನ್ಯಜ್ಞಾನ, ಕಥೆ ಹೇಳುವುದು, ದಿನದ ಸುಭಾಷಿತ(ಚಿಂತನ), ಮುಖ್ಯ ಸುದ್ದಿಗಳು, ಸ್ಥಳೀಯ ಸುದ್ದಿ ಇವುಗಳನ್ನು ಹೇಳಿಸಲಾಗುತ್ತಿತ್ತು. ಈ ವಿಧಾನದಿಂದಾಗಿ ಪ್ರತಿಯೊಂದು ಮಗುವಿಗೂ ಮಾತನಾಡುವ ಅವಕಾಶ ದೊರೆತಿತು.

ಈಗ ಸಂಕೋಚದಿಂದ ಹಿಂಜರಿಯುವ ಮಕ್ಕಳು ಸಹ ಮುಂದೆ ಬರಲು ಯತ್ನಿಸುತ್ತಿದ್ದರು ಮತ್ತು ಕೊಂಚ ಮಾತನಾಡಲು ಶುರುಮಾಡಿಕೊಂಡಿದ್ದರು. ಕೆಲವು ಮಕ್ಕಳು ಧೈರ್ಯದಿಂದ ಸಭೆಯ ಎದುರು ನಿಂತು ನಿರ್ದೇಶನಗಳನ್ನು ಕೊಡಲು ಆರಂಭಿಸಿದರು. ಮುಂಜಾವಿನ ಸಭೆಗಾಗಿ ಮಕ್ಕಳೊಂದಿಗೆ ಕೆಲಸ ಮಾಡುವುದು ಖುಷಿಯ ಸಂಗತಿಯಾಗಿತ್ತು ಮತ್ತು ಮಕ್ಕಳ ಸಾಮರ್ಥ್ಯ ಸಹ ಬೆಳೆಯುತ್ತಾ ಹೋಯಿತು. ಕೆಲವು ಮಕ್ಕಳಿಗೆ ಇನ್ನೂ ಹಿಂಜರಿಕೆ ಇತ್ತಾದರೂ ಪ್ರಯತ್ನಗಳು ಮುಂದುವರಿದವು. ಹೀಗಾಗಿ ಇಂತಹ ಗುಂಪುಗಳಲ್ಲಿ ಕೆಲಸ ಮಾಡುವುದರಲ್ಲಿ ವಿಪುಲವಾದ ಲಾಭಗಳಿವೆ. ನನ್ನ ಮುಖ್ಯ ಉದ್ದೇಶವಿದ್ದದ್ದು ಮಕ್ಕಳು ಯಾವುದೇ ಹಿಂಜರಿಕೆಯಿಲ್ಲದೆ ಮಾತನಾಡುವಂತೆ ಮಾಡುವುದು ಮತ್ತು ಇದನ್ನು ಸಾಧಿಸಲು ಮುಂಜಾವಿನ ಸಾಮಾನ್ಯ ಸಭೆಯು ಅತ್ಯಂತ ಸೂಕ್ತ ಮಾಧ್ಯಮ ಎಂಬುದು ಸಾಬೀತಾಯಿತು. ಮಕ್ಕಳಿಗೆ ಗುಂಪಿನಲ್ಲಿ ಕೆಲಸ

ಮಾಡುವುದರ ಮಹತ್ತ್ವ ಅರ್ಥವಾಗುತ್ತಿರುವುದರಿಂದ, ಗುಂಪು ಕೆಲಸವು ಅತ್ಯಂತ ಉಪಯುಕ್ತವಾಯಿತು. ಕೆಲವೊಮ್ಮೆ ಮಕ್ಕಳು ಇಂತಿಂಥವರು ಇಂತಿಂಥ ಕೆಲಸ ಮಾಡುತ್ತಿಲ್ಲ ಎಂದು ದೂರುತ್ತಿದ್ದರು. ಆದರೆ ಅವರು ಅದನ್ನು ತಮ್ಮಲ್ಲೇ ಪರಿಹರಿಸಿಕೊಳ್ಳುತ್ತಿದ್ದರು.

ಹೀಗಾಗಿ ಶಾಲೆಯ ಪ್ರಾತಃಕಾಲದ ಸಾಮಾನ್ಯ ಸಭೆಯು ಗುಂಪಿನಲ್ಲಿ ಕೆಲಸ ಮಾಡುವುದಕ್ಕೆ ಒಂದು ಉತ್ತಮವಾದ ಮತ್ತು ಉಪಯುಕ್ತವಾದ ಸಾಧನವಾಗಿದೆ ಮತ್ತು ಅದು ಗುಂಪಿನ ಗುರಿಯನ್ನು ಸಾಧಿಸಿಕೊಳ್ಳಲು ನೆರವಾಗುತ್ತಿದೆ.

## ಒಂದೇ ವಿಷಯವನ್ನು ವಿಭಿನ್ನ ಹಂತಗಳಲ್ಲಿ ಕಲಿಸುವುದು

ನಾನು ಈಗಾಗಲೇ ಹೇಳಿದಂತೆ ನಮ್ಮಲ್ಲಿಗೆ ಬರುವ ಮಕ್ಕಳು ವಿಭಿನ್ನ ಮಟ್ಟಗಳಲ್ಲಿ ಇರುತ್ತಾರೆ. ಅವರ ಕೌಶಲ್ಯಗಳು ಮತ್ತು ಸಾಮರ್ಥ್ಯಗಳು ಭಿನ್ನ ಭಿನ್ನವಾಗಿರುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಪ್ರತಿಯೊಂದು ಮಗುವಿನ ಮೂಲಭೂತ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು, ಸುಸ್ಥಿರಗೊಳಿಸಲು ಏನು ಮಾಡಬೇಕು? ನಾನು ಕಳೆದಮೂರು ವರ್ಷಗಳಿಂದಲೂ ಉನ್ನತ ಪ್ರಾಥಮಿಕ ತರಗತಿಗಳಿಗೆ ಪಾಠ ಹೇಳುತ್ತಿದ್ದೇನೆ. ಈ ಮೊದಲು ನಾನು ಬೋಧನೆಯಲ್ಲಿ ಸಾಂಪ್ರದಾಯಿಕ ವಿಧಾನವನ್ನೇ ಅನುಸರಿಸುತ್ತಿದ್ದೆ ಮತ್ತು ಬೇರೆ ಬೇರೆ ತರಗತಿಗಳಿಗೆ ಪ್ರತ್ಯೇಕವಾಗಿ ಗಣಿತದ ಮೂಲಭೂತ ಕ್ರಿಯೆಗಳನ್ನು ಕಲಿಸುವುದಕ್ಕೆ ತುಂಬ ಸಮಯ ವ್ಯರ್ಥವಾಗುತ್ತಿತ್ತು. ಪ್ರತಿಯೊಂದು ತರಗತಿಯಲ್ಲೂ ಈಗಾಗಲೇ ಈ ಕ್ರಿಯೆಗಳನ್ನು ಕಲಿತದ್ದು, ಮುಂದಿನ ಪರಿಕಲ್ಪನೆಯನ್ನು ಕಲಿಯಬೇಕೆನ್ನುವ ಮಕ್ಕಳು ಇರುತ್ತಿದ್ದರು. ಗುಂಪುಗಳನ್ನು ರಚಿಸುವುದರಿಂದ ಈ ಸಮಸ್ಯೆಗೂ ಪರಿಹಾರ ಸಿಕ್ಕಿತು. ಮೂರು ತರಗತಿಗಳಿಂದ ವಿಭಿನ್ನ ಮಟ್ಟಗಳಲ್ಲಿರುವ ಮಕ್ಕಳನ್ನೂ ವಿಂಗಡಿಸಲಾಯಿತು. ಅವರನ್ನು ಮೂರು ಗುಂಪುಗಳಾಗಿ ವಿಭಜಿಸಲಾಯಿತು. ಗುಂಪು-೧ ರಲ್ಲಿ ಗಣಿತದ ಮೂಲಭೂತ ಕ್ರಿಯೆಗಳನ್ನು ಗ್ರಹಿಸಲು ಕಷ್ಟಪಡುತ್ತಿದ್ದ ಮಕ್ಕಳಿದ್ದರು, ಗುಂಪು-೨ ರಲ್ಲಿ ಮೂಲಭೂತ ಕ್ರಿಯೆಗಳನ್ನು ಗ್ರಹಿಸಿ ಕೊಂಚ ಮುಂದಕ್ಕೆ ಹೋದಂಥವರಿದ್ದರು ಮತ್ತು ಗುಂಪು -೩ ರಲ್ಲಿ ಯಾವುದೇ ವಿಷಯವನ್ನಾದರೂ ಗ್ರಹಿಸಬಲ್ಲವರಿದ್ದರು. ಗುಂಪಿನಲ್ಲಿ ಕೆಲಸ ಮಾಡುವುದರಿಂದ ಕೆಲಸವು ಸುಲಭವಾಗಿದ್ದರೂ, ಬೇರೆ ವಿಷಯಗಳನ್ನು ಕಲಿಸುವ ಶಿಕ್ಷಕರು ತರಗತಿಗಳನ್ನು ಅದೇ ಸಮಯದಲ್ಲಿ ತೆಗೆದುಕೊಳ್ಳಬೇಕಾದ್ದರಿಂದ, ಪ್ರತಿಯೊಂದು ತರಗತಿಯಿಂದ ಮಕ್ಕಳನ್ನು ಗುಂಪಿಗೆ ತೆಗೆದುಕೊಳ್ಳುವುದರಲ್ಲಿ ಕೆಲವೊಂದು ಸಮಸ್ಯೆಗಳು ಉದ್ಭವಿಸಿದವು. ಆದರೂ ವಿಭಿನ್ನ ಮಟ್ಟಗಳಲ್ಲಿ ಗುರುತಿಸಿದ ಮೇಲೆ ಕೆಲಸ ಸುಲಭವಾಗುತ್ತದೆ, ಏಕೆಂದರೆ ಒಂದು ನಿರ್ದಿಷ್ಟ ದಿನದಂದು ಒಂದು ನಿರ್ದಿಷ್ಟ ಗುಂಪಿನೊಂದಿಗೆ ಏನು ಮಾಡಬೇಕೆಂದು ನಮಗೆ ಗೊತ್ತಿರುತ್ತದೆ.

೬, ೭ ಮತ್ತು ೮ನೆಯ ತರಗತಿಯ ಮಕ್ಕಳಿಗೆ ಭಿನ್ನರಾಶಿಗಳನ್ನು ಕಲಿಸಿದ ಅನುಭವ ಬಹಳ ಚೆನ್ನಾಗಿತ್ತು. ಈ ಮೊದಲು ನಾನು ಒಂದು ಸರಳವಾದ ಮತ್ತು

ಸಾಮಾನ್ಯವಾದ ಬೋಧನಾ ವಿಧಾನವನ್ನು ಅಳವಡಿಸಿಕೊಂಡಿದ್ದೆ. ಆದರೆ ಮಕ್ಕಳು ಗಣಿತದ ವಿಭಿನ್ನ ಕ್ರಿಯೆಗಳನ್ನು ಮಾಡುತ್ತಿದ್ದರೂ ಅವರು ಭಿನ್ನರಾಶಿಗಳ ಪರಿಕಲ್ಪನೆಯನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡಿಲ್ಲ ಎಂದು ನನಗೆ ಅನ್ನಿಸುತ್ತಿತ್ತು. ಗಣಿತದ ಅಮೂರ್ತ ಗುಣವೇ ಅವರಿಗೆ ತೊಡಕಾಗುತ್ತಿತ್ತೇನೋ. ಆಗ ನಾನು ಮಕ್ಕಳ ಮನಸ್ಸಿಗೆ ಭಿನ್ನ ರಾಶಿಗಳು ಅರ್ಥವಾಗುವಂತೆ ಏನಾದರೂ ಮಾಡಬೇಕೆಂದು ನಿರ್ಧರಿಸಿದೆ. ಎಪಿಎಫ್ (ಅಜೀಂಪ್ರೇಮ್ ಜಿ ಫೌಂಡೇಶನ್) ನನನ್ನ ಗೆಳೆಯರು ನನ್ನ ಪ್ರಯತ್ನದಲ್ಲಿ ನೆರವಾದರು. ಅವರೊಡನೆ ಮಾಡಿದ ಚರ್ಚೆಯನ್ನಾಧರಿಸಿ ನಾನು ಭಿನ್ನರಾಶಿಯ ಪರಿಕಲ್ಪನೆಯನ್ನು ಕುರಿತು ಕೆಲವೊಂದು ಚಟುವಟಿಕೆಗಳನ್ನು ಹಮ್ಮಿಕೊಂಡೆ.

ಮೊಟ್ಟ ಮೊದಲನೆಯದಾಗಿ ನಾನು ಮಕ್ಕಳೊಂದಿಗೆ ಮಾತನಾಡಿ ಭಿನ್ನರಾಶಿಯನ್ನು ಕುರಿತು ಅವರ ಗಮನವನ್ನು ಸೆಳೆದೆ. ನಾನು ತರಗತಿಗೆ ಒಂದಿಷ್ಟು ಕಾಗದ, ಕತ್ತರಿ, ಗೋಂದು, ಬಣ್ಣಗಳು ಇವುಗಳನ್ನೆಲ್ಲಾ ತೆಗೆದುಕೊಂಡು ಹೋಗಿ, ಕಾಗದಗಳನ್ನು ಕತ್ತರಿಸಿ, ಮಡಿಚಿ ಹೊಸ ಚಟುವಟಿಕೆಯೇನನ್ನೋ ಮಾಡಲಿದ್ದೇವೆ ಎಂದು ಅವರಿಗೆ ಹೇಳಿದೆ. ಎಲ್ಲ ಮಕ್ಕಳೂ ಉತ್ಸುಕತೆಯಿಂದ ಚಟುವಟಿಕೆಯಲ್ಲಿ ಭಾಗವಹಿಸಿದರು. ಕಾಗದವನ್ನು ಮಡಿಚುವ ಮೂಲಕ ನಾನು ಅವರಿಗೆ ಅರ್ಧ(೧/೨), ಮೂರನೇ ಒಂದು ಭಾಗ (೧/೩), ಕಾಲುಭಾಗ (೧/೪), ಐದನೆಯ ಒಂದು ಭಾಗ, ಆರನೆಯ ಒಂದು ಭಾಗ ಈ ಪರಿಕಲ್ಪನೆಗಳನ್ನು ಕಲಿಸಿದೆ. ಬಹಳ ಆಸಕ್ತಿದಾಯಕ ಸಂಗತಿಯೆಂದರೆ ಮಕ್ಕಳು ನಿಜಕ್ಕೂ ಕಷ್ಟಪಟ್ಟು ಕಲಿಯುತ್ತಿದ್ದರು ಮತ್ತು ಮಡಿಚುವುದರಲ್ಲಿ ತಪ್ಪಾದರೆ, ಸರಿಯಾಗುವವರೆಗೂ ಅವರು ಮತ್ತೆ ಮತ್ತೆ ಪ್ರಯತ್ನಿಸುತ್ತಿದ್ದರು. ಕೊನೆಗೂ ಅವರೆಲ್ಲ ಕಾಗದ ಮಡಿಚುವ ಮೂಲಕ ಭಿನ್ನರಾಶಿಯ ಸೀಳುಗಳನ್ನು ನಿರ್ಮಿಸುವುದರಲ್ಲಿ ಯಶಸ್ವಿಯಾದರು. ನಾವು ಅವುಗಳನ್ನು ಒಂದು ಪಟದ ಮೇಲೆ ಅಂಟಿಸಿ ತರಗತಿಯ ಕೋಣೆಯಲ್ಲಿ ನೇತು ಹಾಕಿದೆವು. ಮಕ್ಕಳು ಅದನ್ನು ತಮ್ಮ ನೋಟು ಬುಕ್ಕಗಳಲ್ಲೂ ಅಂಟಿಸಿಕೊಂಡರು. ಅವರು ದೊಡ್ಡ, ಸಣ್ಣ, ಆರೋಹಣ ಹಾಗೂ ಅವರೋ ಹಣ ಕ್ರಮದಲ್ಲಿರುವ ಮತ್ತು ಸಮಾನವಾದ ಭಿನ್ನರಾಶಿಗಳನ್ನು ಗ್ರಹಿಸಿದರು.

ಈ ಚಟುವಟಿಕೆಯ ಅತ್ಯುತ್ತಮ ಅಂಶವೆಂದರೆ, ಮಕ್ಕಳು ತಮ್ಮ ಕೈಯಾರೆ ಚಟುವಟಿಕೆಯನ್ನು ಮಾಡುತ್ತಾ (ಕಾಗದಗಳನ್ನು ಮಡಿಚುತ್ತಾ) ತಾವಾಗಿಯೇ ಭಿನ್ನರಾಶಿಯ ಕಲ್ಪನೆಗಳನ್ನು ಅರ್ಥಮಾಡಿಕೊಂಡಿದ್ದು, ಇಲ್ಲಿ ನನಗೆ ಒಂದು ಘಟನೆ ನೆನಪಾಗುತ್ತಿದೆ. ಒಂದು ಮಗು ಕಾಗದವನ್ನು ಮಡಿಚುವಾಗ ಅದು ಹಾಳಾಗಿ ಹೋಯಿತು. ಅಷ್ಟು ಹೊತ್ತಿಗೆ ಊಟದ ಸಮಯವಾಯಿತು. ಎಲ್ಲ ಮಕ್ಕಳೂ ಊಟಕ್ಕೆ ಹೋದರು. ಆದರೆ ಈ ಮಗು ಹೋಗದೇ ತನ್ನ ತರಗತಿಯ ಕೊಠಡಿಯಲ್ಲೇ ಕುಳಿತಿದ್ದು ಕಾಗದವನ್ನು ಮಡಿಚುತ್ತಿತ್ತು ಮತ್ತು ತನ್ನ ಭಿನ್ನರಾಶಿಯ ಸೀಳುಗಳು ಸಿದ್ಧವಾದ ಮೇಲೆಯೇ ಅವನು ಊಟಕ್ಕೆ ಹೋದದ್ದು. ಅದು ನನಗೆ ಒಂದು ಹೃದಯಸ್ಪರ್ಶಿ ಘಟನೆಯಾಗಿತ್ತು. ಮಾರನೆಯ ದಿನ

ಅವನು ತನ್ನ ಕೆಲಸವನ್ನು ನನಗೆ ತೋರಿಸಿದ; ಅವನ ಕಣ್ಣ ಮಿಂಚನ್ನು ನೋಡುವುದೇ ಒಂದು ಸಂತೃಪ್ತಿಯ ಅನುಭವವಾಗಿತ್ತು. ಹೀಗೆ ಗುಂಪಿನೊಡನೆ ಕೆಲಸ ಮಾಡುವುದು ಬಹಳ ಚೆನ್ನಾಗಿತ್ತು ಮತ್ತು ಉಪಯುಕ್ತ ಅನುಭವವಾಗಿತ್ತು.

**ಗೋಡೆ ಪತ್ರಿಕೆ**

ನನ್ನ ಶಾಲೆಯಲ್ಲಿ ನಾನು ಮಕ್ಕಳೊಂದಿಗೆ ಗೋಡೆ ಪತ್ರಿಕೆಗಳನ್ನು ಸಿದ್ಧಪಡಿಸುವುದರಲ್ಲಿಯೂ ಕೆಲಸ ಮಾಡಲು ಪ್ರಯತ್ನಿಸಿದ್ದೇನೆ. ಮಕ್ಕಳ ಸೃಷ್ಟಿಶೀಲ ಸಾಮರ್ಥ್ಯವನ್ನು ಬೆಳೆಸುವಲ್ಲಿ ಗೋಡೆ ಪತ್ರಿಕೆಗಳು ಅದ್ಭುತ ಮಾಧ್ಯಮಗಳಾಗಿವೆ. ಮಕ್ಕಳು ತಮ್ಮದೇ ಆದ ಲೇಖನ/ ಕವನ ಇವುಗಳನ್ನು ಬರೆದು ಅದನ್ನು ಒಂದು ಪಟದ ಮೇಲೆ ಅಂಟಿಸಿ ತಮ್ಮ ತಮ್ಮ ತರಗತಿ ಕೊಠಡಿಗಳ ಗೋಡೆಗಳ ಮೇಲೆ ತೂಗುಹಾಕುತ್ತಾರೆ. ಈ ಗೋಡೆ ಪತ್ರಿಕೆಗಳು ಕೇವಲ ತರಗತಿಯ ಗೋಡೆಗಳಿಗೆ ಅಲಂಕಾರವಾಗದೆ, ಮಕ್ಕಳ ಸೃಷ್ಟಿಶೀಲ ಸಾಮರ್ಥ್ಯವನ್ನು ಹೆಚ್ಚಿಸಲು ಸಾಧನವಾಗುತ್ತವೆ. ಪ್ರಾರಂಭದಲ್ಲಿ ಮಕ್ಕಳಿಗೆ ತಮ್ಮದೇ ಆದ ಬರಹಗಳನ್ನು ತರಲು ಸಾಧ್ಯವಾಗುತ್ತಿರಲಿಲ್ಲ; ಏಕೆಂದರೆ ಅದನ್ನು ಮಾಡುವುದು ಕೊಂಚ ಕಷ್ಟದ ಕೆಲಸವೇ. ಹೀಗಾಗಿ ಮೊದಲಿಗೆ ಅವರಿಗೆ ನಾನೇ ಕಥೆಗಳನ್ನು ಹೇಳಿದೆ, ಕವನಗಳನ್ನು ಓದಿಸಿದೆ ಮತ್ತು ಓದಲು ಗ್ರಂಥಾಲಯದಿಂದ ಪುಸ್ತಕಗಳನ್ನು ತಂದುಕೊಟ್ಟೆ. ಇದಾದ ನಂತರ ಕೆಲವರು ತಾವಾಗಿಯೇ ಬರೆಯಲು ಶಕ್ತರಾದರು ಮತ್ತು ಕೆಲವರು ಪ್ರಯತ್ನಿಸುತ್ತಿದ್ದಾರೆ.

ಗೋಡೆ ಪತ್ರಿಕೆಯ ಹೆಸರು "ಉಮಂಗ್''. ಇದು ಸೃಷ್ಟಿಶೀಲತೆಯನ್ನು ಬೆಳೆಸುತ್ತದಲ್ಲದೆ ಬರೆಯುವ ಹಾಗೂ ಆಲೋಚಿಸುವ ಕೌಶಲ್ಯಗಳನ್ನು ಮುನ್ನೆಲೆಗೆ ತರುತ್ತದೆ. ಎಲ್ಲ ಮಕ್ಕಳೂ ಈ ಚಟುವಟಿಕೆಯಲ್ಲಿ ಖುಷಿಯಿಂದ ಭಾಗವಹಿಸಿ, "ಮೇಡಂ! ನಮ್ಮ ಶಾಲೆಯಲ್ಲಿ ಇದುವರೆಗೂ ನಾವು ಇಂಥದ್ದನ್ನು ಮಾಡಿರಲಿಲ್ಲ. ಇದನ್ನು ನಾವು ತುಂಬ ಇಷ್ಟಪಡುತ್ತೇವೆ" ಎಂದು ಹೇಳುತ್ತಿದ್ದರು. ವಿಭಿನ್ನ ಮಟ್ಟಗಳ ಮಕ್ಕಳೊಂದಿಗೆ ಕೆಲಸ ಮಾಡುವುದು ಒಂದು ಸವಾಲು, ಆದರೆ ಯಾರೇ ಆಗಲೀ ಗುಂಪುಗಳಲ್ಲಿ ಕೆಲಸ ಮಾಡಿದರೆ, ಪ್ರಯತ್ನಿಸಿದರೆ, ಆಗ ಕೆಲಮಟ್ಟಿಗೆ ಯಶಸ್ಸನ್ನು ಗಳಿಸುವುದು ಸಾಧ್ಯವಾಗಬಹುದು.

ನನ್ನ ಶಾಲೆಯ ಮಕ್ಕಳೊಂದಿಗೆ ಕೆಲಸ ಮಾಡುವಾಗ, ದೊಡ್ಡ ಗುರಿಗಳನ್ನು ಸಾಧಿಸಬೇಕೆಂದರೆ ಮೊದಲು ಸಣ್ಣಪುಟ್ಟ ಗುರಿಗಳನ್ನು ಸಾಧಿಸಲು ಪ್ರಯತ್ನಿಸಬೇಕು ಎಂದು ನನಗೆ ಅನ್ನಿಸಿತು. ಬಹಳ ಮುಖ್ಯವಾದ ಸಂಗತಿಯೆಂದರೆ ಮಕ್ಕಳು ಮೂಲಭೂತ ಪರಿಕಲ್ಪನೆಗಳನ್ನು ಗ್ರಹಿಸಿಕೊಳ್ಳುವಂತೆ ಮಾಡಬೇಕು. ಪ್ರತಿನಿತ್ಯವೂ ಏನಾದರೂ ಹೊಸದನ್ನು ಮಾಡಬೇಕು ಎಂದು ನನಗೆ ನನ್ನ ತರಗತಿಯ ಅನುಭವಗಳು ಪ್ರೇರಣೆ ನೀಡುತ್ತವೆ. ಮಕ್ಕಳೂ ಸಹ ನನ್ನಲ್ಲಿ ವಿಶ್ವಾಸವನ್ನಿರಿಸಿಕೊಂಡಿದ್ದಾರೆ. ಇದೇ

ರೀತಿಯಲ್ಲಿ ಭವಿಷ್ಯದಲ್ಲೂ ಸಹ ಮಕ್ಕಳೊಂದಿಗೆ ಕೆಲಸ ಮಾಡಬೇಕು ಎಂದು ನಾನು ಆಶಿಸುತ್ತೇನೆ.

ಮೊನಿಕಾರವರು ಉತ್ತರಾಖಂಡದ ಉತ್ತರ ಕಾಶಿಯಲ್ಲಿನ ಬಾಲ್ಡೋಗಿ ಎಂಬಲ್ಲಿ ಸರ್ಕಾರಿ ವಿದ್ಯಾರ್ಥಿನಿಯರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸಹಾಯಕ ಅಧ್ಯಾಪಕಿಯಾಗಿ ಕೆಲಸಮಾಡುತ್ತಿದ್ದಾರೆ. ಅವರು ವಿಜ್ಞಾನವನ್ನು ಕಲಿಸುತ್ತಿದ್ದಾರೆ. ಅವರನ್ನು ಈ ಇಮೇಲ್ ಮೂಲಕ ಸಂಪರ್ಕಿಸಬಹುದು: Monikaamod6006@gmail.com